# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಅಕ್ಟೋಬರ್ ೧, ೨೦೧೫ (ಅಶ್ವಯುಜ ೯, ಶಕ ವರ್ಷ ೧೯೩೭)<br>Bengaluru, Thursday, October 1, 2015 (Aashwayuja 9, Shaka Varsha 1937) | ಸಂಚಿಕೆ ೪೦<br>Issue 40 |
|---|---|---|


## ಭಾಗ ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು

### ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು

**ತಿದ್ದುಪಡಿ ಅಂತಿಮ ಅಧಿಸೂಚನೆ**

**ಸಂಖ್ಯೆ : ಕೆ.ಎಸ್.ಎ./ಸಿ.ಆರ್/10/94-95, ಬೆಂಗಳೂರು, ದಿನಾಂಕ : 30-07-2015.**

ಬೆಂಗಳೂರು ನಗರದ ಹೆಬ್ಬಾಳ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಬಿನ್ನಿಮಿಲ್ ಹಿಂಭಾಗದ ಗಂಗೇನಹಳ್ಳಿ ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಕಲಂ 3ರಡಿ ಅಂತಿಮವಾಗಿ ದಿನಾಂಕ : 13-09-2013ರ ಸಮ ಸಂಖ್ಯೆ ಅಧಿಸೂಚನೆಯಲ್ಲಿ ಘೋಷಿಸಿದ್ದು, ಸದರಿ ಅಧಿಸೂಚನೆಯಲ್ಲಿ ಪ್ರಸ್ತಾವಿತ ಪ್ರದೇಶದ ಜಮೀನಿನ ಸ.ನಂ. ವಿಸ್ತೀರ್ಣ, ಮಾಲಿಕತ್ವ ವಿವರಗಳನ್ನು ಈ ಕೆಳಕಂಡ ಷೆಡ್ಯೂಲ್‌ನಲ್ಲಿ ತೋರಿಸಿರುವಂತೆ ತಿದ್ದುಪಡಿ ಮಾಡಿ ಪರಿಷ್ಕೃತ ಅಧಿಸೂಚನೆಯನ್ನು ಹೊರಡಿಸಲು ಆಯುಕ್ತರು, ಕರ್ನಾಟಕ ಕೊಳಗೇರಿ, ಅಭಿವೃದ್ಧಿ ಮಂಡಳಿ, ಬೆಂಗಳೂರು ಇವರ ಪತ್ರ ಸಂಖ್ಯೆ : ಕಕೊಅಮ/ಕಂ-1/ಆರ್-2/60/2014-15/1077, ದಿನಾಂಕ : 19-03-2015 ಮತ್ತು ಸಂಖ್ಯೆ : ಕಕೊಅಮ/ಕಂ-1/ಆರ್-2/60/2001-02/241, ದಿನಾಂಕ : 29-06-2015ರ ಪತ್ರಗಳಲ್ಲಿ ಕೋರಿರುತ್ತಾರೆ. ಆದ್ದರಿಂದ ದಿನಾಂಕ : 13-09-2013ರ ಅಂತಿಮ ಅಧಿಸೂಚನೆಯಲ್ಲಿ ಈ ಕೆಳಕಂಡಂತೆ ಷೆಡ್ಯೂಲ್‌ನಲ್ಲಿ ವಿವರಗಳನ್ನು ತಿದ್ದುಪಡಿ ಮಾಡಿದ್ದು, ಅಂತೆಯೇ ಓದಿಕೊಳ್ಳತಕ್ಕದ್ದು ಎಂದು ಆದೇಶಿಸಿದೆ.

**ಷೆಡ್ಯೂಲ್**

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದ ಮಾಲೀಕತ್ವದ ವಿವರ | ಸ.ನಂ. | ವಿಸ್ತೀರ್ಣ | ಚೆಕ್ಕುಬಂದಿ | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಬಿನ್ನಿಮಿಲ್ ಹಿಂಭಾಗದ ಗಂಗೇನಹಳ್ಳಿ, ಕೊಳಚೆ ಪ್ರದೇಶ | 1. ಲಕ್ಷ್ಮಿ ಎಂಟರ್ ಪ್ರೈಸಸ್<br>2. ಮೀನಾ ಎಂಟರ್ ಪ್ರೈಸಸ್<br>3. ವಿ.ವಿ. ಎಂಟರ್ ಪ್ರೈಸಸ್ | 22/1 ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಖಾತ ನಂ. 15/5, 15/6, 15/7 | 0-27 ಗುಂಟೆ | ಚರಂಡಿ | ರಸ್ತೆ | ಖಾಸಗಿ ಮನೆಗಳು | ಚರಂಡಿ ಮತ್ತು ಗಲ್ಲಿ ರಸ್ತೆ |

P.R. 94

SC-50

**ವಿ. ಶಂಕರ್**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು

### ಪ್ರಿಲಿಮಿನರಿ ಅಧಿಸೂಚನೆ

**ಸಂಖ್ಯೆ : ಕೆ.ಎಸ್.ಎ./ಸಿ.ಆರ್: 11/2015-16, ಬೆಂಗಳೂರು, ದಿನಾಂಕ : 10-07-2015.**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ರಾಜರಾಜೇಶ್ವರಿ ವಿಧಾನಸಭಾ ಕ್ಷೇತ್ರದ ಮುನೇಶ್ವರನಗರ (ಮುತ್ಯಾಲನಗರ), 2ನೇ ಹಂತದಲ್ಲಿರುವ ಕೊಳಚೆ ಪ್ರದೇಶದ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ 70ಕ್ಕೂ ಹೆಚ್ಚು ಕುಟುಂಬಗಳು ವಾಸವಾಗಿದ್ದು, ಸದರಿ ಪ್ರದೇಶವು ಮನುಷ್ಯ ವಾಸ ಮಾಡಲು ಯೋಗ್ಯವಲ್ಲದ ಹಾಗೂ ಅನಾರೋಗ್ಯಕರ ಪರಿಸ್ಥಿತಿಯಲ್ಲಿರುತ್ತಾರೆ. ಕುಡಿಯುವ ನೀರು, ಬೀದಿ ದೀಪ, ಶೌಚಾಲಯ ಮುಂತಾದ ಮೂಲಸೌಲಭ್ಯಗಳನ್ನು ಒದಗಿಸುವ ಅಗತ್ಯವಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3ರ ಅಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸಲು ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಇವರಿಂದ ಪತ್ರ ಸಂಖ್ಯೆ : ಕಕೊಅಮ/ಕಂ-2/ಆರ್-8/38/2015-16/135, ದಿನಾಂಕ : 20-05-2015 ಮತ್ತು ಸಂಖ್ಯೆ : ಕಕೊಅಮ/ಕಂ-2/ಆರ್-8/25/2015-16/172, ದಿನಾಂಕ : 01-06-2015ರಂತೆ ಪ್ರಸ್ತಾವನೆ ಸಲ್ಲಿಸಲ್ಪಟ್ಟಿರುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3ರ ಅಡಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡುಬಂದಿರುತ್ತದೆ.

ಏತನ್ಮಧ್ಯೆ ಸರ್ಕಾರದ ಸುತ್ತೋಲೆ ಸಂಖ್ಯೆ : 71/ಕೋಮಂಇ/2009, ದಿನಾಂಕ : 24-02-2010ರಲ್ಲಿ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3 ಮತ್ತು 11 ರಡಿಯಲ್ಲಿ ಜಿಲ್ಲಾಧಿಕಾರಿಗಳು ಕೊಳಚೆ ಪ್ರದೇಶಗಳನ್ನು ಕೊಳಚೆ ಪ್ರದೇಶವೆಂದು ಘೋಷಿಸಿ ಅಧಿಸೂಚನೆ ಹೊರಡಿಸುವ ಮುನ್ನ ಸರ್ಕಾರದ ವಸತಿ ಇಲಾಖೆಯ ಅನುಮೋದನೆ ಪಡೆಯತಕ್ಕದ್ದೆಂದು ಸೂಚನೆಯಿದ್ದು, ಆ ಪ್ರಕಾರವಾಗಿ ಕೊಳಚೆ ಪ್ರದೇಶಗಳೆಂದು ಘೋಷಣೆ ಮಾಡಬೇಕಾದ ಪ್ರಸ್ತಾವನೆಗಳನ್ನು ಈ ಕಛೇರಿಯಿಂದ ಸರ್ಕಾರಕ್ಕೆ ಅನುಮೋದನೆಗಾಗಿ ಸಲ್ಲಿಸಲಾಗುತ್ತಿದ್ದು, ತದನಂತರದಲ್ಲಿ ಸರ್ಕಾರದ ಪತ್ರ ಸಂಖ್ಯೆ : ವಇ/71/ಕೋಮಂಇ/2009, ದಿನಾಂಕ : 12-07-2010ರ ಪತ್ರದಲ್ಲಿ ಕೊಳಚೆ ಪ್ರದೇಶಗಳೆಂದು ಘೋಷಿಸುವ ಬಗ್ಗೆ ಇನ್ನು ಮುಂದೆ ಸರ್ಕಾರದ ಪೂರ್ವಾನುಮೋದನೆ ಕೋರಿ ಪ್ರಸ್ತಾವನೆಗಳನ್ನು ಸರ್ಕಾರಕ್ಕೆ ಸಲ್ಲಿಸುವ ಬದಲು ದಿನಾಂಕ : 02-07-2010ರಲ್ಲಿನ ಸೂಚನೆಯಂತೆ ಮತ್ತು ಹಾಲಿ ಅಸ್ತಿತ್ವದಲ್ಲಿರುವ ನಿಯಮಗಳಡಿಯ ಕಾರ್ಯವಿಧಾನವನ್ನು ಅನುಸರಿಸಿದಂತೆ ಕ್ರಮವಹಿಸಿ, ಅಧಿಸೂಚನೆ ಸಂಖ್ಯೆ : ವಇ 73/ಕೋಮಂಇ/2001, ದಿನಾಂಕ : 26-06-2002ರಲ್ಲಿ ಜಿಲ್ಲಾಧಿಕಾರಿಗಳಿಗೆ ಪ್ರದತ್ತ ಮಾಡಲಾಗಿರುವ ಅಧಿಕಾರ ವ್ಯಾಪ್ತಿಯಲ್ಲಿ ಘೋಷಣೆಗೆ ಕ್ರಮವಹಿಸುವುದು ಎಂದು ಸರ್ಕಾರದಿಂದ ನಿರ್ದೇಶನ ನೀಡಲಾಗಿದೆ.

ಆದ್ದರಿಂದ, ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3ರ ಅಡಿ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು "ಕೊಳಚೆ ಪ್ರದೇಶ"ವೆಂದು ಘೋಷಿಸಲು ಉದ್ದೇಶಿಸಿರುತ್ತದೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಶೇಷಾದ್ರಿಪುರ, ಬೆಂಗಳೂರು-560020 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 (ಹದಿನೈದು) ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

### ಷೆಡ್ಯೂಲ್

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ರಾಜರಾಜೇಶ್ವರಿ ವಿಧಾನಸಭಾ ಕ್ಷೇತ್ರದ ಮುನೇಶ್ವರನಗರ (ಮುತ್ಯಾಲನಗರ) 2ನೇ ಹಂತದಲ್ಲಿರುವ ಕೊಳಚೆ ಪ್ರದೇಶದ ಚಕ್ಕುಬಂದಿ ಹಾಗೂ ಹದ್ದುಬಸ್ತು ತಃಖ್ತೆ :

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಮುನೇಶ್ವರನಗರ (ಮುತ್ಯಾಲನಗರ), 2ನೇ ಹಂತದಲ್ಲಿ ಇರುವ ಕೊಳಚೆ ಪ್ರದೇಶ | ರೈಲ್ವೆ ಇಲಾಖೆ | - | 0-12 ಗುಂಟೆ | ಮುನೇಶ್ವರನಗರ (ಮುತ್ಯಾಲನಗರ) ಘೋಷಿತ ಕೊಳಚೆ ಪ್ರದೇಶ | ರೈಲ್ವೆ ಜಾಗ | ರೈಲ್ವೆ ಜಾಗ | ರೈಲ್ವೆ ಜಾಗ |
| | | | - | 0-07 ಗುಂಟೆ | ಖಾಸಗಿ ನಿವೇಶನ | ರೈಲ್ವೆ ಜಾಗ | ಮುನೇಶ್ವರನಗರ (ಮುತ್ಯಾಲನಗರ) ಘೋಷಿತ ಕೊಳಚೆ ಪ್ರದೇಶ | ರೈಲ್ವೆ ಜಾಗ |
| | | | **ಒಟ್ಟು** | **0-19 ಗುಂಟೆ** | | | | |

P.R. 95

SC-50

**ವಿ. ಶಂಕರ್**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು

### ಕೊಳಚೆ ಪ್ರದೇಶ ಸ್ಥಳಾಂತರಿಕೆ ಉದ್ದೇಶದ ಅಧಿಸೂಚನೆ

**ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಕಲಂ 11 ರಡಿ)**

**ಸಂಖ್ಯೆ : ಕೆ.ಎಸ್.ಎ./ಸಿ.ಆರ್/12/2015-16, ಬೆಂಗಳೂರು, ದಿನಾಂಕ : 15-07-2015.**

ಬೆಂಗಳೂರು ನಗರ, ಸರ್ವಜ್ಞನಗರ ವಿಧಾನಸಭಾ ಕ್ಷೇತ್ರದ ಕಾಚರಕನಹಳ್ಳಿ ಕೆರೆ ಅಂಗಳದ ಹೆಚ್.ಬಿ.ಆರ್. ಲೇಔಟ್‌ನ, ಬಾಬಾಸಾಹೇಬ್ ಡಾ॥ ಬಿ.ಆರ್. ಅಂಬೇಡ್ಕರ್‌ನಗರ ಕೊಳಚೆ ಪ್ರದೇಶವನ್ನು ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಪ್ರದೇಶವನ್ನು 143 ಕುಟುಂಬಗಳು ವಾಸಿಸುತ್ತಿರುವ ಕೊಳಚೆ ಪ್ರದೇಶವು ಅತ್ಯಂತ ಅನಾರೋಗ್ಯ ಮತ್ತು ಮಾಲಿನ್ಯದಿಂದ ಕೂಡಿದ್ದು, ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು, ಬೀದಿ ದೀಪ, ಚರಂಡಿ, ರಸ್ತೆ ಶೌಚಾಲಯ ಇತ್ಯಾದಿಗಳಿಂದ ವಂಚಿತವಾಗಿರುತ್ತದೆ. ಈ ಪ್ರದೇಶವನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಸಹಾಯಕ ಕಾರ್ಯಪಾಲಕ ಅಭಿಯಂತರರು ನಂ. 3ನೇ ಉಪವಿಭಾಗ ರವರು ದಿನಾಂಕ : 06-03-2015 ರಂದು ಸ್ಥಳ ತನಿಖೆ ಮಾಡಿದ್ದು, ಈ ಸ್ಥಳ ತನಿಖಾ ಸಮಯದಲ್ಲಿ 0-18 ಗುಂಟೆ ಪ್ರದೇಶದಲ್ಲಿ 450 ಜನ ಸಂಖ್ಯೆಯ 143 ಕುಟುಂಬಗಳು ಗುಡಿಸಲುಗಳನ್ನು ಹಾಕಿಕೊಂಡು ವಾಸಿಸುತ್ತಿದ್ದು, ಈ ಜಮೀನು ಕೆರೆ ಪ್ರದೇಶವಾಗಿರುವುದಾಗಿ ಆಯುಕ್ತರು, ಕರ್ನಾಟಕ ಕೊಳಗೇರಿ ಮಂಡಳಿ, ಬೆಂಗಳೂರುರವರು ಪತ್ರ ಸಂಖ್ಯೆ : ಕಕೊಅಮ/ಕಂ-1/ಆರ್-2/ಡಾ॥ ಅಂಬೇಡ್ಕರ್‌ನಗರ/25/15-16/173, ದಿನಾಂಕ : 28-05-2015 ರಂತೆ ವರದಿಯನ್ನು ಸಲ್ಲಿಸಿರುತ್ತಾರೆ. ಅಂತೆಯೇ ಸದರಿ ಕೊಳಚೆ ಪ್ರದೇಶವನ್ನು (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಕಲಂ 11 ರಡಿ ಕೊಳಚೆ ಪ್ರದೇಶದ ಸ್ಥಳಾಂತರಿಸುವಿಕೆಯ ಉದ್ದೇಶಕ್ಕಾಗಿ ಅಧಿಸೂಚನೆ ಹೊರಡಿಸಲು ದಾಖಲೆಗಳೊಂದಿಗೆ ವರದಿಯನ್ನು ಸಲ್ಲಿಸಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಕಲಂ 11 ರಡಿ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಈ ಪ್ರದೇಶದ ನಿವಾಸಿಗಳನ್ನು **ಕೇವಲ ಸ್ಥಳಾಂತರಿಸುವ ಉದ್ದೇಶಕ್ಕೆ ಕೊಳಚೆ ಪ್ರದೇಶವೆಂದು ಈ ಮೂಲಕ ಘೋಷಿಸಲಾಗಿದೆ.**

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಶೇಷಾದ್ರಿಪುರ, ಬೆಂಗಳೂರು-20 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದ ಮಾಲೀಕತ್ವದ ವಿವರ | ಸ.ನಂ. | ವಿಸ್ತೀರ್ಣ | ಚಕ್ಕುಬಂದಿ | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಡಾ॥ ಬಿ.ಆರ್. ಅಂಬೇಡ್ಕರನಗರ ಕೊಳಚೆ ಪ್ರದೇಶ | ಸರ್ಕಾರಿ ಕೆರೆ | 153 | 0-18 ಗುಂಟೆ | ಲಾ.ಸ.ನಂ. 144 | ಸ.ನಂ. 153ರ ಉಳಿಕೆ | ಸ.ನಂ. 153ರ ಉಳಿಕೆ | ಸ.ನಂ. 153ರ ಉಳಿಕೆ |

P.R. 96

SC-50

ವಿ. ಶಂಕರ್
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು

### ಕೊಳಚೆ ಪ್ರದೇಶ ಸ್ಥಳಾಂತರಿಕೆ ಉದ್ದೇಶದ ಅಧಿಸೂಚನೆ

**(ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಕಲಂ 11 ರಡಿ)**

**ಸಂಖ್ಯೆ : ಕೆ.ಎಸ್.ಎ./ಸಿ.ಆರ್/69/2014-15, ಬೆಂಗಳೂರು, ದಿನಾಂಕ : 15-07-2015.**

ಬೆಂಗಳೂರು ನಗರ, ಸರ್ವಜ್ಞನಗರ ವಿಧಾನಸಭಾ ಕ್ಷೇತ್ರದ ಕಾಚರಕನಹಳ್ಳಿ ಕೆರೆ ಅಂಗಳದ ಬುಡಬುಡಕೆ ಜನಾಂಗದ ಕೊಳಚೆ ಪ್ರದೇಶವನ್ನು ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಪ್ರದೇಶವನ್ನು 35 ಕುಟುಂಬಗಳು ವಾಸಿಸುತ್ತಿರುವ ಕೊಳಚೆ ಪ್ರದೇಶವು ಅತ್ಯಂತ ಅನಾರೋಗ್ಯ ಮತ್ತು ಮಾಲಿನ್ಯದಿಂದ ಕೂಡಿದ್ದು, ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು, ಬೀದಿ ದೀಪ, ಚರಂಡಿ, ರಸ್ತೆ, ಶೌಚಾಲಯ ಇತ್ಯಾದಿಗಳಿಂದ ವಂಚಿತವಾಗಿರುತ್ತದೆ. ಈ ಪ್ರದೇಶವನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಸಹಾಯಕ ಕಾರ್ಯಪಾಲಕ ಅಭಿಯಂತರರು ನಂ. 3ನೇ ಉಪವಿಭಾಗರವರು ದಿನಾಂಕ : 06-03-2015 ರಂದು ಸ್ಥಳ ತನಿಖೆ ಮಾಡಿದ್ದು, ಈ ಸ್ಥಳ ತನಿಖಾ ಸಮಯದಲ್ಲಿ 0-02.08 ಗುಂಟೆ ಪ್ರದೇಶದಲ್ಲಿ 200 ಜನ ಸಂಖ್ಯೆಯ 35 ಕುಟುಂಬಗಳು ಗುಡಿಸಲುಗಳನ್ನು ಹಾಕಿಕೊಂಡು ವಾಸಿಸುತ್ತಿದ್ದು, ಈ ಜಮೀನು ಕೆರೆ ಪ್ರದೇಶವಾಗಿರುವುದಾಗಿ ಆಯುಕ್ತರು, ಕರ್ನಾಟಕ ಕೊಳಗೇರಿ ಮಂಡಳಿ, ಬೆಂಗಳೂರುರವರು ಪತ್ರ ಸಂಖ್ಯೆ : ಕಕೊಅಮ/ಕಂ-1/ಆರ್-2/01/15-16/174, ದಿನಾಂಕ : 28-05-2015 ರಂತೆ

ವರದಿಯನ್ನು ಸಲ್ಲಿಸಿರುತ್ತಾರೆ. ಅಂತೆಯೇ ಸದರಿ ಕೊಳಚೆ ಪ್ರದೇಶವನ್ನು (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಕಲಂ 11 ರಡಿ ಕೊಳಚೆ ಪ್ರದೇಶದ ಸ್ಥಳಾಂತರಿಸುವಿಕೆಯ ಉದ್ದೇಶಕ್ಕಾಗಿ ಅಧಿಸೂಚನೆ ಹೊರಡಿಸಲು ದಾಖಲೆಗಳೊಂದಿಗೆ ವರದಿಯನ್ನು ಸಲ್ಲಿಸಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಕಲಂ 11 ರಡಿ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಈ ಪ್ರದೇಶದ ನಿವಾಸಿಗಳನ್ನು **ಕೇವಲ ಸ್ಥಳಾಂತರಿಸುವ ಉದ್ದೇಶಕ್ಕೆ ಕೊಳಚೆ ಪ್ರದೇಶವೆಂದು ಈ ಮೂಲಕ ಘೋಷಿಸಲಾಗಿದೆ.**

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಶೇಷಾದ್ರಿಪುರ, ಬೆಂಗಳೂರು–20 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದ ಮಾಲೀಕತ್ವದ ವಿವರ | ಸ.ನಂ. | ವಿಸ್ತೀರ್ಣ | ಚಕ್ಕುಬಂದಿ | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಕಾರೇನಹಳ್ಳಿ ಬುಡಬುಡುಕೆ ಜನಾಂಗದ ಕೊಳಚೆ ಪ್ರದೇಶ (ಚಂದ್ರಿಕ ಸೋಪ್ ಫ್ಯಾಕ್ಟರಿ ಹತ್ತಿರ) | ಸರ್ಕಾರಿ ಕೆರೆ | 153 | 0–02.08 ಗುಂಟೆ | ಸ.ನಂ. 153ರ ಉಳಿಕೆ | ಸ.ನಂ. 153ರ ಉಳಿಕೆ | ಸ.ನಂ. 153ರ ಉಳಿಕೆ | ಹಳ್ಳ |

**P.R. 97**

**SC-50**

**ವಿ. ಶಂಕರ್**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು

### ಪ್ರಿಲಿಮಿನರಿ ಅಧಿಸೂಚನೆ

**ಸಂಖ್ಯೆ : ಕೆ.ಎಸ್.ಎ./ಸಿ.ಆರ್: 13/2015–16, ಬೆಂಗಳೂರು, ದಿನಾಂಕ : 10–07–2015.**

ಬೆಂಗಳೂರು ನಗರದ ಸರ್ವಜ್ಞನಗರ ವಿಧಾನಸಭಾ ಕ್ಷೇತ್ರದ ಲಿಂಗರಾಜಪುರಂ ಪೂರ್ವ ವಲಯದ ಜಾನಕಿರಾಮ್ ಬಡಾವಣೆಯ ರೈಲ್ವೆ ಜಾಗದಲ್ಲಿರುವ ಭಾಗ–1 ಮತ್ತು ಭಾಗ–2ರ ಕೊಳಚೆ ಪ್ರದೇಶದ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ 428 ಕುಟುಂಬಗಳು ವಾಸವಾಗಿದ್ದು, ಸದರಿ ಪ್ರದೇಶವು ಮನುಷ್ಯ ವಾಸ ಮಾಡಲು ಯೋಗ್ಯವಲ್ಲದ ಹಾಗೂ ಅನಾರೋಗ್ಯಕರ ಪರಿಸ್ಥಿತಿಯಲ್ಲಿರುತ್ತಾರೆ. ಕುಡಿಯುವ ನೀರು, ಬೀದಿ ದೀಪ, ಶೌಚಾಲಯ ಮುಂತಾದ ಮೂಲಸೌಲಭ್ಯಗಳನ್ನು ಒದಗಿಸುವ ಅಗತ್ಯವಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3ರ ಅಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸಲು ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಇವರಿಂದ ಪತ್ರ ಸಂಖ್ಯೆ : ಕಕೊಅಮ/ಕಂ–1/ಆರ್–2/ಜಾನಕಿರಾಮ್/56/2014–15/189, ದಿನಾಂಕ : 08–06–2015ರಂತೆ ಪ್ರಸ್ತಾವನೆ ಸಲ್ಲಿಸಲ್ಪಟ್ಟಿರುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3ರ ಅಡಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡುಬಂದಿರುತ್ತದೆ.

ಏತನ್ಮಧ್ಯೆ ಸರ್ಕಾರದ ಸುತ್ತೋಲೆ ಸಂಖ್ಯೆ : 71/ಕೋಮಂಇ/2009, ದಿನಾಂಕ : 24–02–2010ರಲ್ಲಿ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3 ಮತ್ತು 11 ರಡಿಯಲ್ಲಿ ಜಿಲ್ಲಾಧಿಕಾರಿಗಳು ಕೊಳಚೆ ಪ್ರದೇಶಗಳನ್ನು ಕೊಳಚೆ ಪ್ರದೇಶವೆಂದು ಘೋಷಿಸಿ ಅಧಿಸೂಚನೆ ಹೊರಡಿಸುವ ಮುನ್ನ ಸರ್ಕಾರದ ವಸತಿ ಇಲಾಖೆಯ ಅನುಮೋದನೆ ಪಡೆಯತಕ್ಕದ್ದೆಂದು ಸೂಚನೆಯಿದ್ದು, ಆ ಪ್ರಕಾರವಾಗಿ ಕೊಳಚೆ ಪ್ರದೇಶಗಳೆಂದು ಘೋಷಣೆ ಮಾಡಬೇಕಾದ ಪ್ರಸ್ತಾವನೆಗಳನ್ನು ಈ ಕಛೇರಿಯಿಂದ ಸರ್ಕಾರಕ್ಕೆ ಅನುಮೋದನೆಗಾಗಿ ಸಲ್ಲಿಸಲಾಗುತ್ತಿದ್ದು, ತದನಂತರದಲ್ಲಿ ಸರ್ಕಾರದ ಪತ್ರ ಸಂಖ್ಯೆ : ವಇ/71/ಕೋಮಂಇ/2009, ದಿನಾಂಕ : 12–07–2010ರ ಪತ್ರದಲ್ಲಿ ಕೊಳಚೆ ಪ್ರದೇಶಗಳೆಂದು ಘೋಷಿಸುವ ಬಗ್ಗೆ ಇನ್ನು ಮುಂದೆ ಸರ್ಕಾರದ ಪೂರ್ವಾನುಮೋದನೆ ಕೋರಿ ಪ್ರಸ್ತಾವನೆಗಳನ್ನು ಸರ್ಕಾರಕ್ಕೆ ಸಲ್ಲಿಸುವ ಬದಲು ದಿನಾಂಕ : 02–07–2010ರಲ್ಲಿನ ಸೂಚನೆಯಂತೆ ಮತ್ತು ಹಾಲಿ ಅಸ್ತಿತ್ವದಲ್ಲಿರುವ ನಿಯಮಗಳಡಿಯ ಕಾರ್ಯವಿಧಾನವನ್ನು ಅನುಸರಿಸಿದಂತೆ ಕ್ರಮವಹಿಸಿ, ಅಧಿಸೂಚನೆ ಸಂಖ್ಯೆ : ವಇ/73/ಕೋಮಂಇ/2001,

ದಿನಾಂಕ : 26–06–2002ರಲ್ಲಿ ಜಿಲ್ಲಾಧಿಕಾರಿಗಳಿಗೆ ಪ್ರದತ್ತ ಮಾಡಲಾಗಿರುವ ಅಧಿಕಾರ ವ್ಯಾಪ್ತಿಯಲ್ಲಿ ಘೋಷಣೆಗೆ ಕ್ರಮವಹಿಸುವುದು ಎಂದು ಸರ್ಕಾರದಿಂದ ನಿರ್ದೇಶನ ನೀಡಲಾಗಿದೆ.

ಆದ್ದರಿಂದ, ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3ರ ಅಡಿ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು "**ಕೊಳಚೆ ಪ್ರದೇಶ**"ವೆಂದು ಘೋಷಿಸಲು ಉದ್ದೇಶಿಸಿರುತ್ತದೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಶೇಷಾದ್ರಿಪುರ, ಬೆಂಗಳೂರು–560020 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 (ಹದಿನೈದು) ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

ಬೆಂಗಳೂರು ನಗರದ ಸರ್ವಜ್ಞನಗರ ವಿಧಾನಸಭಾ ಕ್ಷೇತ್ರದ ಲಿಂಗರಾಜಪುರಂ ಪೂರ್ವ ವಲಯದ ಜಾನಕಿರಾಮ್ ಬಡಾವಣೆಯ ರೈಲ್ವೆ ಜಾಗದಲ್ಲಿರುವ ಭಾಗ–1 ಮತ್ತು ಭಾಗ–2ರ ಕೊಳಚೆ ಪ್ರದೇಶದ ಚಕ್ಕುಬಂದಿ ಹಾಗೂ ಹದ್ದುಬಸ್ತು ತಃಖ್ತೆ :

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಬೆಂಗಳೂರು ನಗರ ಲಿಂಗರಾಜಪುರಂ ಪೂರ್ವ ವಲಯ ರೈಲ್ವೆ ಜಾಗದಲ್ಲಿ ಇರುವ ಭಾಗ–2ರ 'ಎ' ಬ್ಲಾಕ್ ಪ್ರದೇಶ | ರೈಲ್ವೆ ಇಲಾಖೆ | – | 0–20 ಗುಂಟೆ | ರೈಲ್ವೆ ಜಾಗ | ರೈಲ್ವೆ ಜಾಗ | ರೈಲ್ವೆ ರಸ್ತೆ | ರೈಲ್ವೆ ಹಳಿ |
| 2 | ಬೆಂಗಳೂರು ನಗರ ಲಿಂಗರಾಜಪುರಂ ಪೂರ್ವ ವಲಯ ರೈಲ್ವೆ ಜಾಗದಲ್ಲಿ ಇರುವ ಭಾಗ–1ರ 'ಬಿ' ಬ್ಲಾಕ್ ಕೊಳಚೆ ಪ್ರದೇಶ | ರೈಲ್ವೆ ಇಲಾಖೆ | – | 0–07 ಗುಂಟೆ | ಚರಂಡಿ | ರೈಲ್ವೆ ಜಾಗ | ಲಿಂಗರಾಜಪುರಂ ಸ್ಲಂಗೆ ಬಿ.ಡಿ.ಎ. ವತಿಯಿಂದ 20X15 ಅಡಿ ನಿವೇಶನ ನೀಡಿರುವ ಜಾಗ | ರೈಲ್ವೆ ಭಾಗ |
| | | | **ಒಟ್ಟು** | **0–27 ಗುಂಟೆ** | | | | |

**P.R. 98**

**SC-50**

**ವಿ. ಶಂಕರ್**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು

**ಕೊಳಚೆ ಪ್ರದೇಶ ಸ್ಥಳಾಂತರಿಕೆ ಉದ್ದೇಶದ ಅಧಿಸೂಚನೆ**

**(ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಕಲಂ 11 ರಡಿ)**

**ಸಂಖ್ಯೆ : ಕೆ.ಎಸ್.ಎ./ಸಿ.ಆರ್/67/2014–15, ಬೆಂಗಳೂರು, ದಿನಾಂಕ : 15–07–2015.**

ಬೆಂಗಳೂರು ನಗರ, ಸರ್ವಜ್ಞನಗರ ವಿಧಾನಸಭಾ ಕ್ಷೇತ್ರದ ಕಾಚರಕನಹಳ್ಳಿ ಕೆರೆ ಅಂಗಳದ ಚಂದ್ರಿಕ ಸೋಪ್ ಫ್ಯಾಕ್ಟರಿ ಬಳಿಯಿರುವ ಕೊಳಚೆ ಪ್ರದೇಶವನ್ನು ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಪ್ರದೇಶವನ್ನು 70 ಕುಟುಂಬಗಳು ವಾಸಿಸುತ್ತಿರುವ ಕೊಳಚೆ ಪ್ರದೇಶವು ಅತ್ಯಂತ ಅನಾರೋಗ್ಯ ಮತ್ತು ಮಾಲಿನ್ಯದಿಂದ ಕೂಡಿದ್ದು, ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು, ಬೀದಿ ದೀಪ, ಚರಂಡಿ, ರಸ್ತೆ ಶೌಚಾಲಯ ಇತ್ಯಾದಿಗಳಿಂದ ವಂಚಿತವಾಗಿರುತ್ತದೆ. ಈ ಪ್ರದೇಶವನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಸಹಾಯಕ ಕಾರ್ಯಪಾಲಕ ಅಭಿಯಂತರರು ನಂ. 3ನೇ ಉಪವಿಭಾಗರವರು ದಿನಾಂಕ : 06–03–2015 ರಂದು ಸ್ಥಳ ತನಿಖೆ ಮಾಡಿದ್ದು, ಈ ಸ್ಥಳ ತನಿಖಾ ಸಮಯದಲ್ಲಿ 0–18 ಗುಂಟೆ ಪ್ರದೇಶದಲ್ಲಿ 200 ಜನ ಸಂಖ್ಯೆಯ 70 ಕುಟುಂಬಗಳು ಗುಡಿಸಲುಗಳನ್ನು ಹಾಕಿಕೊಂಡು ವಾಸಿಸುತ್ತಿದ್ದು, ಈ ಜಮೀನು ಕೆರೆ ಪ್ರದೇಶವಾಗಿರುವುದಾಗಿ ಆಯುಕ್ತರು, ಕರ್ನಾಟಕ ಕೊಳಗೇರಿ ಮಂಡಳಿ, ಬೆಂಗಳೂರುರವರು ಪತ್ರ ಸಂಖ್ಯೆ : ಕಕೊಅಮ/ಕಂ–1/ಆರ್–2/02/15–16/170, ದಿನಾಂಕ : 28–05–2015 ರಂತೆ ವರದಿಯನ್ನು ಸಲ್ಲಿಸಿರುತ್ತಾರೆ. ಅಂತೆಯೇ ಸದರಿ ಕೊಳಚೆ ಪ್ರದೇಶವನ್ನು (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಕಲಂ 11 ರಡಿ ಕೊಳಚೆ ಪ್ರದೇಶದ ಸ್ಥಳಾಂತರಿಸುವಿಕೆಯ ಉದ್ದೇಶಕ್ಕಾಗಿ ಅಧಿಸೂಚನೆ ಹೊರಡಿಸಲು ದಾಖಲೆಗಳೊಂದಿಗೆ ವರದಿಯನ್ನು ಸಲ್ಲಿಸಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಕಲಂ 11 ರಡಿ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಈ ಪ್ರದೇಶದ ನಿವಾಸಿಗಳನ್ನು **ಕೇವಲ ಸ್ಥಳಾಂತರಿಸುವ ಉದ್ದೇಶಕ್ಕೆ ಕೊಳಚೆ ಪ್ರದೇಶವೆಂದು ಈ ಮೂಲಕ ಘೋಷಿಸಲಾಗಿದೆ.**

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಶೇಷಾದ್ರಿಪುರ, ಬೆಂಗಳೂರು–20 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದ ಮಾಲೀಕತ್ವದ ವಿವರ | ಸ.ನಂ. | ವಿಸ್ತೀರ್ಣ | ಚೆಕ್ಕುಬಂದಿ | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಕಾರೇನಹಳ್ಳಿ ಕೊಳಚೆ ಪ್ರದೇಶ (ಚಂದ್ರಿಕ ಸೋಪ್ ಫ್ಯಾಕ್ಟರಿ ಹತ್ತಿರ) | ಸರ್ಕಾರಿ ಕೆರೆ | 153 | 0–18 ಗುಂಟೆ | ಸ.ನಂ. 153ರ ಉಳಿಕೆ | ಸ.ನಂ. 153ರ ಉಳಿಕೆ | ಸ.ನಂ. 153ರ ಉಳಿಕೆ | ಸ.ನಂ. 153ರ ಉಳಿಕೆ |

P.R. 99

SC-50

ವಿ. ಶಂಕರ್
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು

**ಕೊಳಚೆ ಪ್ರದೇಶ ಸ್ಥಳಾಂತರಿಕೆ ಉದ್ದೇಶದ ಅಧಿಸೂಚನೆ**

**(ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಕಲಂ 11 ರಡಿ)**

**ಸಂಖ್ಯೆ : ಕೆ.ಎಸ್.ಎ./ಸಿ.ಆರ್/68/2014–15, ಬೆಂಗಳೂರು, ದಿನಾಂಕ : 15–07–2015.**

ಬೆಂಗಳೂರು ನಗರ, ಸರ್ವಜ್ಞನಗರ ವಿಧಾನಸಭಾ ಕ್ಷೇತ್ರದ ಕಾಚರಕನಹಳ್ಳಿ ಕೆರೆ ಅಂಗಳದ ಹೆಚ್.ಆರ್.ಬಿ.ಆರ್. ಲೇಔಟ್, ಶ್ರೀರಾಮ ದೇವಸ್ಥಾನದ ಹತ್ತಿರವಿರುವ ಕೊಳಚೆ ಪ್ರದೇಶವನ್ನು ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಪ್ರದೇಶವನ್ನು 130 ಕುಟುಂಬಗಳು ವಾಸಿಸುತ್ತಿರುವ ಕೊಳಚೆ ಪ್ರದೇಶ ಅತ್ಯಂತ

ಅನಾರೋಗ್ಯ ಮತ್ತು ಮಾಲಿನ್ಯದಿಂದ ಕೂಡಿದ್ದು, ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು, ಬೀದಿ ದೀಪ, ಚರಂಡಿ, ರಸ್ತೆ ಶೌಚಾಲಯ ಇತ್ಯಾದಿಗಳಿಂದ ವಂಚಿತವಾಗಿರುತ್ತದೆ. ಈ ಪ್ರದೇಶವನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಸಹಾಯಕ ಕಾರ್ಯಪಾಲಕ ಅಭಿಯಂತರರು ನಂ. 3ನೇ ಉಪವಿಭಾಗರವರು ದಿನಾಂಕ : 06–03–2015 ರಂದು ಸ್ಥಳ ತನಿಖೆ ಮಾಡಿದ್ದು, ಈ ಸ್ಥಳ ತನಿಖಾ ಸಮಯದಲ್ಲಿ 1–06.08 ಎಕರೆ/ಗುಂಟೆ ಪ್ರದೇಶದಲ್ಲಿ 350 ಜನ ಸಂಖ್ಯೆಯ 130 ಕುಟುಂಬಗಳು ಗುಡಿಸಲುಗಳನ್ನು ಹಾಕಿಕೊಂಡು ವಾಸಿಸುತ್ತಿದ್ದು, ಈ ಜಮೀನು ಕೆರೆ ಪ್ರದೇಶವಾಗಿರುವುದಾಗಿ ಆಯುಕ್ತರು, ಕರ್ನಾಟಕ ಕೊಳಗೇರಿ ಮಂಡಳಿ, ಬೆಂಗಳೂರುರವರು ಪತ್ರ ಸಂಖ್ಯೆ : ಕಕೊಅಮ/ಕಂ–1/ಆರ್–2/03/15–16/171, ದಿನಾಂಕ : 28–05–2015 ರಂತೆ ವರದಿಯನ್ನು ಸಲ್ಲಿಸಿರುತ್ತಾರೆ. ಅಂತೆಯೇ ಸದರಿ ಕೊಳಚೆ ಪ್ರದೇಶವನ್ನು (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಕಲಂ 11 ರಡಿ ಕೊಳಚೆ ಪ್ರದೇಶದ ಸ್ಥಳಾಂತರಿಸುವಿಕೆಯ ಉದ್ದೇಶಕ್ಕಾಗಿ ಅಧಿಸೂಚನೆ ಹೊರಡಿಸಲು ದಾಖಲೆಗಳೊಂದಿಗೆ ವರದಿಯನ್ನು ಸಲ್ಲಿಸಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಕಲಂ 11 ರಡಿ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಈ ಪ್ರದೇಶದ ನಿವಾಸಿಗಳನ್ನು **ಕೇವಲ ಸ್ಥಳಾಂತರಿಸುವ ಉದ್ದೇಶಕ್ಕೆ ಕೊಳಚೆ ಪ್ರದೇಶವೆಂದು ಈ ಮೂಲಕ ಘೋಷಿಸಲಾಗಿದೆ.**

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಶೇಷಾದ್ರಿಪುರ, ಬೆಂಗಳೂರು–20 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದ ಮಾಲೀಕತ್ವದ ವಿವರ | ಸ.ನಂ. | ವಿಸ್ತೀರ್ಣ | ಚಕ್ಕುಬಂದಿ | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಶ್ರೀ ರಾಮ ದೇವಸ್ಥಾನದ ಕೊಳಚೆ ಪ್ರದೇಶ | ಸರ್ಕಾರಿ ಕೆರೆ | 153 | 1–06.08 ಎ/ಗು | ನಾಲಾ | ಸ.ನಂ. 153ರ ಉಳಿಕೆ | ಸ.ನಂ. 153ರ ಉಳಿಕೆ | ಸ.ನಂ. 153ರ ಉಳಿಕೆ |

**P.R. 100**

**SC-50**

**ವಿ. ಶಂಕರ್**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

## ಅಸಿಸ್ಟೆಂಟ್ ಕಮೀಷನರ್ ಮತ್ತು ಭೂ ಸ್ವಾಧೀನಾಧಿಕಾರಿಗಳವರ ಕಛೇರಿ, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ

**ಭೂ ಸ್ವಾಧೀನ ಅಧಿನಿಯಮ ವಿಧಿ 16(2)ರ ರೀತ್ಯಾ ಅಧಿಸೂಚನೆ**

**ಕ್ರ. ಎಲ್.ಎ.ಕ್ಯೂ : ಎಫ್ : 02/2014–15, ದಿನಾಂಕ : 15–06–2015.**

ಸಾರ್ವಜನಿಕ ಮತ್ತು ಸಂಬಂಧಪಟ್ಟವರುಗಳ ತಿಳುವಳಿಕೆಗಾಗಿ ಈ ಮೂಲಕ ಅಧಿಸೂಚಿಸುವುದೇನೆಂದರೆ, ಈ ಮುಂದಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರತಕ್ಕ ಒಂದು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಚಿಕ್ಕಬಳ್ಳಾಪುರ ತಾಲ್ಲೂಕು ನಂದಿ ಹೋಬಳಿ ಬಾಲಕುಂಟಹಳ್ಳಿ ಗ್ರಾಮದ ಜಮೀನು ಜಕ್ಕಲಮಡಗು ಜಲಾಶಯ ಅಭಿವೃದ್ಧಿ ಕಾಮಗಾರಿಗಾಗಿ ಹೊಸ ರಸ್ತೆ ನಿರ್ಮಾಣಕ್ಕಾಗಿ ಬೇಕಾಗುತ್ತದೆಂದು ಕರ್ನಾಟಕ ಸರ್ಕಾರವು ಅದರ ಆದೇಶ ಸಂಖ್ಯೆ : ಕಂಇ 13 ಭೂಸ್ವಾಕೋ. 2014, ದಿನಾಂಕ : 17–11–2014ರಲ್ಲಿ ಭೂ ಸ್ವಾಧೀನ ಅಧಿನಿಯಮದ ವಿಧಿ 6(1)ರ ರೀತ್ಯಾ ಘೋಷಣೆಯನ್ನು ಮಾಡಿರುವಂತೆ ಹಾಗೂ ಚಿಕ್ಕಬಳ್ಳಾಪುರ ಜಿಲ್ಲಾಧಿಕಾರಿಗಳ ಎಲ್.ಎ.ಕ್ಯೂ.: ಎಸ್ :ಆರ್ : 03/2010–11, ದಿನಾಂಕ : 20–03–2013 ರಂತೆ ಈ ಕೆಳಕಂಡ ಜಮೀನುಗಳ ಸ್ವಾಧೀನವನ್ನು ಕಲಂ 4(1) ರಂತೆ ದಿನಾಂಕ : 31–08–2006 ರಂದು ಸರ್ಕಾರದ ವಶಕ್ಕೆ ತೆಗೆದುಕೊಳ್ಳಲಾಗಿದೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಜಿಲ್ಲೆ : ಚಿಕ್ಕಬಳ್ಳಾಪುರ ತಾಲ್ಲೂಕು : ಚಿಕ್ಕಬಳ್ಳಾಪುರ ಹೋಬಳಿ : ನಂದಿ ಗ್ರಾಮ : ಬಾಲಕುಂಟಹಳ್ಳಿ**

| ಕ್ರ. ಸಂ. | ಖಾತೆದಾರರು/ಅನುಭವದಾರರ ಹೆಸರು | ಸ.ನಂ. | ತರಹೆ | ಚಕ್ಕುಬಂದಿ | | | | ಭೂ ಸ್ವಾಧೀನ ಪಡೆದ ವಿಸ್ತೀರ್ಣ ಮತ್ತು ಆಕಾರ | |
|---|---|---|---|---|---|---|---|---|---|
| | | | | ಉತ್ತರ | ಪೂರ್ವ | ದಕ್ಷಿಣ | ಪಶ್ಚಿಮ | ವಿಸ್ತೀರ್ಣ ಎ–ಗುಂ | ಆಕಾರ ರೂ. ಪೈ. |
| 1 | ಮಾರೇಗೌಡ ಬಿನ್ ದೊಡ್ಡರಾಮೇಗೌಡ | 137 | ಖುಷ್ಕಿ | ಸ.ನಂ. 73 | ಸ.ನಂ. 73 | ಸ.ನಂ. 137 ಉಳಿಕೆ | ಸ.ನಂ. 73 | 0–01 | 0–03 |

**P.R. 101**

**SC-25**

**ಹೆಚ್. ಅಮರೇಶ್, ಕೆ.ಎ.ಎಸ್.**
ಅಸಿಸ್ಟೆಂಟ್ ಕಮೀಷನರ್ ಹಾಗೂ
ಭೂಸ್ವಾಧೀನಾಧಿಕಾರಿಗಳು,
ಚಿಕ್ಕಬಳ್ಳಾಪುರ ಉಪ ವಿಭಾಗ, ಚಿಕ್ಕಬಳ್ಳಾಪುರ.

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59